ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ, ದಿನಾಂಕ: 18ನೇ ಜುಲೈ, 2019

ರಾಜ್ಯದ ಖಜಾನೆಯಿಂದ ಕಳವು ಆಗಿರುವ ಕುರಿತು

ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

328 (195) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2016-17ನೇ ಸಾಲಿನ ಆರ್ಥಿಕ ವರ್ಷದಲ್ಲಿ ರಾಜ್ಯದ ಖಜಾನೆಯಿಂದ ರೂ.18.11 ಕೋಟಿ ಕಳವು ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ರೀತಿಯಾಗಿ ಸರ್ಕಾರದ ಖಜಾನೆಯಿಂದಲೇ ಕಳವು ಮಾಡಲು ಅವಕಾಶ ದೊರೆತ್ತಿದ್ದು ಹೇಗೆ; (ವಿವರ ನೀಡುವುದು)

(ಆ) ಈ ಪ್ರಕರಣದ ಬಗ್ಗೆ ಯಾವ ಪೊಲೀಸ್ ಠಾಣೆಯಲ್ಲಿ ದೂರು ದಾಖಲಾಗಿದೆ; ಇದುವರೆಗೂ ದೂರು ದಾಖಲಾಗದಿದ್ದಲ್ಲಿ ದೂರು ಯಾವಾಗ ದಾಖಲಿಸಲಾಗುವುದು; ಈ ಬಗ್ಗೆ ತನಿಖೆ ಕೈಗೊಂಡು ಆರೋಪಿಗಳನ್ನು ಹಿಡಿದು ಶಿಕ್ಷಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ;

(ಇ) 2016-17ನೇ ಸಾಲಿನ ಆರ್ಥಿಕ ವರ್ಷದಲ್ಲಿ ರಾಜ್ಯದ ಖಜಾನೆಯಿಂದ ರೂ.18.11 ಕೋಟಿ ಕಳವು ಆಗಿರುವ ಬಗ್ಗೆ

ಸಿ.ಎ.ಜಿ., ವರದಿಯಲ್ಲಿ ನಮೂದಿಸಿದ್ದು ಕಳವು ಮಾಡಿರುವ ಇಲಾಖಾ ಮುಖ್ಯಸ್ಥರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಈ ಬಗ್ಗೆ ಸರ್ಕಾರದ ನಿಲುವೇನು?